UIS ದಿ. 27/01/2022

# ಕರ್ನಾಟಕ ವಿಧಾನ ಪರಿಷತ್ತು

1. ಸದಸ್ಯರ ಹೆಸರು : ಶ್ರೀ ಎನ್. ಅಪ್ಪಾಜಿಗೌಡ
2. ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 1473
3. ಉತ್ತರಿಸಬೇಕಾದ ದಿನಾಂಕ : 24-09-2021

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ಪ್ರಧಾನ ಮಂತ್ರಿ ಆದರ್ಶ ಗ್ರಾಮ ಯೋಜನೆ ಯಾವ ವರ್ಷದಿಂದ ಜಾರಿಯಲ್ಲಿದೆ. ಈ ಯೋಜನೆಯನ್ವಯ ಆದರ್ಶ ಗ್ರಾಮ ಯೋಜನೆಗೆ ಒಳಪಡುವ ಗ್ರಾಮಕ್ಕೆ ಸರ್ಕಾರದ ಸುತ್ತೋಲೆಯನ್ವಯ ಯಾವ ಯಾವ ಮಾನದಂಡಗಳು ಅನ್ವಯಿಸುತ್ತದೆ. (ಸರ್ಕಾರದ ಸುತ್ತೋಲೆಯ ಪ್ರತಿ ನೀಡುವುದು) | ಸಂಸದ್ ಆದರ್ಶ ಗ್ರಾಮ ಯೋಜನೆ 2014 ರಿಂದ ಜಾರಿಯಲ್ಲಿದೆ. ಈ ಯೋಜನೆಯನ್ವಯ ಆದರ್ಶ ಗ್ರಾಮ ಯೋಜನೆಗೆ ಒಳಪಡುವ ಗ್ರಾಮದ ಮಾನದಂಡಗಳ ವಿವರ.<br>1. ಬಯಲು ಪ್ರಾದೇಶದ ಗ್ರಾಮ ಪಂಚಾಯಿತಿಗಳು 3000–5000 ಜನಸಂಖ್ಯೆ ಮತ್ತು ಗುಡ್ಡಗಾಡು, ಬುಡಕಟ್ಟು ಮತ್ತು ಹಿಂದುಳಿದ ಜಿಲ್ಲೆಗಳು 1000–3000 ಜನಸಂಖ್ಯೆ ಹೊಂದಿರಬೇಕು. ಸರಾಸರಿ ಘಟಕದ ಗ್ರಾತ್ರವು ದೊಡ್ಡದಾಗಿರುವ ಜಿಲ್ಲೆಗಳಲ್ಲಿ ಅಪೇಕ್ಷಿತ ಜನಸಂಖ್ಯೆ ಹೊಂದಿರುವ ಗ್ರಾಮ ಪಂಚಾಯಿತಿಗಳನ್ನು ಆಯ್ಕೆ ಮಾಡಬೇಕು.<br>2. ಸರಾಸರಿ ಘಟಕದ ಗಾತ್ರವು ಚಿಕ್ಕದಾಗಿರುವ ಜಿಲ್ಲೆಗಳಲ್ಲಿ ಅಪೇಕ್ಷಿತ ಜನಸಂಖ್ಯೆ ಹೊಂದಿರುವ 2–3 ಗ್ರಾಮ ಪಂಚಾಯಿತಿಗಳನ್ನು ಆಯ್ಕೆ ಮಾಡಬೇಕು.<br>3. ಸಂಸತ್ ಸದಸ್ಯರು ತಮ್ಮ ಹಾಗೂ ತನ್ನ ಪತಿ/ಪತ್ನಿಯ ಸ್ವಂತ ಗ್ರಾಮಗಳನ್ನು ಹೊರತುಪಡಿಸಿ ಇತರ ಯಾವುದೇ ಗ್ರಾಮ ಪಂಚಾಯಿತಿಯನ್ನು ಆಯ್ಕೆ ಮಾಡಬಹುದು.<br>4. ಲೋಕಸಭಾ ಸದಸ್ಯರು ತಮ್ಮ ಮತಕ್ಷೇತ್ರದ ವ್ಯಾಪ್ತಿಯೊಳಗೆ ಗ್ರಾಮ ಪಂಚಾಯಿತಿಯನ್ನು ಆಯ್ಕೆ ಮಾಡಬೇಕು.<br>5. ರಾಜ್ಯ ಸಭಾ ಸದಸ್ಯರು ತಾವು ಆಯ್ಕೆಯಾಗಿರುವ ರಾಜ್ಯದಲ್ಲಿನ ತಮ್ಮ ಯಾವುದೇ ಗ್ರಾಮ ಪಂಚಾಯಿತಿಯನ್ನು ಆಯ್ಕೆ ಮಾಡಬಹುದು.<br>6. ನಾಮನಿರ್ದೇಶನಗೊಂಡ ಸಂಸತ್ ಸದಸ್ಯರು ದೇಶದ ಯಾವುದೇ ಗ್ರಾಮೀಣ ಭಾಗದಲ್ಲಿನ ಗ್ರಾಮ ಪಂಚಾಯಿತಿ ಆಯ್ಕೆ ಮಾಡಬಹುದು.<br>7. ಗ್ರಾಮ ಪಂಚಾಯಿತಿ ಹೊಂದಿಲ್ಲದ ನಗರ ಮತಕ್ಷೇತ್ರಗಳ ಸಂಸತ್ ಸದಸ್ಯರು ಹತ್ತಿರದ ಗ್ರಾಮೀಣ ಮತಕ್ಷೇತ್ರದ ಯಾವುದೇ ಗ್ರಾಮ ಪಂಚಾಯತಿ ಆಯ್ಕೆ ಮಾಡಬಹುದು. |

| | | |
|---|---|---|
| ಆ) | ಸಂಸದರು ಹಾಗೂ ರಾಜ್ಯ ಸಭಾ ಸದಸ್ಯರು ಇಲ್ಲಿಯವರೆಗೆ ಕಳೆದ 3 ವರ್ಷಗಳಲ್ಲಿ ರಾಜ್ಯದಲ್ಲಿ ಎಷ್ಟು ಗ್ರಾಮಗಳನ್ನು ಈ ಯೋಜನೆಗೆ ಆಯ್ಕೆ ಮಾಡಿದ್ದಾರೆ. (ಸಂಸದರು/ರಾಜ್ಯಸಭಾ ಸದಸ್ಯರವಾರು, ಜಿಲ್ಲಾವಾರು ಗ್ರಾಮಗಳ ಮಾಹಿತಿಯನ್ನು ನೀಡುವುದು) | (ಸಂಸದರು/ರಾಜ್ಯಸಭಾ ಸದಸ್ಯರವಾರು, ಜಿಲ್ಲಾವಾರು ಗ್ರಾಮಗಳ ಮಾಹಿತಿಯನ್ನು **ಅನುಬಂಧ-1** ಎಂದು ಗುರುತಿಸಿ ಲಗತ್ತಿಸಿದೆ. |
| ಇ) | ಪ್ರಧಾನಮಂತ್ರಿ ಆದರ್ಶ ಗ್ರಾಮ ಯೋಜನೆಯಡಿ ಗ್ರಾಮದ ಅಭಿವೃದ್ಧಿಗೆ ಮೀಸಲಾಗಿರುವ ಅನುದಾನವೆಷ್ಟು; ಈ ಅನುದಾನದಲ್ಲಿ ಗ್ರಾಮದಲ್ಲಿ ಯಾವ ಯಾವ ಅಭಿವೃದ್ಧಿ ಕಾಮಗಾರಿಗಳನ್ನು ಮಾಡಬಹುದು; (ಕಾಮಗಾರಿ ಅನುಷ್ಠಾನ ಸಂಬಂಧ ಸರ್ಕಾರದ ಸುತ್ತೋಲೆಯ ಪ್ರತಿಯನ್ನು ನೀಡುವುದು) | ಸಂಸದ್ ಆದರ್ಶ ಗ್ರಾಮ ಯೋಜನೆಗೆ ಯಾವುದೇ ಪ್ರತ್ಯೇಕ ಅನುದಾನವು ಇರುವುದಿಲ್ಲ. ಕೇಂದ್ರ ಮತ್ತು ರಾಜ್ಯ ಸರ್ಕಾರಗಳ ವಿವಿಧ ಯೋಜನೆಗಳನ್ನು ಒಗ್ಗೂಡಿಸುವ ಮೂಲಕ ಅಭಿವೃದ್ಧಿ ಕಾಮಗಾರಿಗಳನ್ನು ಕೈಗೊಳ್ಳಬಹುದು. ಆಯ್ಕೆಯಾದ ಗ್ರಾಮ ಪಂಚಾಯತಿಗೆ ರೂ. 50,000/- ಗಳನ್ನು ಆಡಳಿತಾತ್ಮಕ ವೆಚ್ಚವಾಗಿ ನೀಡಲಾಗುವುದು. |
| ಈ) | ಈ ಯೋಜನೆ ಪ್ರಾರಂಭವಾದಾಗಿನಿಂದ ಮಂಡ್ಯ ಜಿಲ್ಲೆಯಲ್ಲಿ ಈ ಯೋಜನೆಯಡಿ ಆಯ್ಕೆಯಾದ ಗ್ರಾಮಗಳಾವುವು; ಕಾಮಗಾರಿ ಯಾವ ಹಂತದಲ್ಲಿದೆ? (ತಾಲ್ಲೂಕುವಾರು ಸಂಪೂರ್ಣ ವಿವರ ನೀಡುವುದು) | ಮಂಡ್ಯ ಜಿಲ್ಲೆಯಲ್ಲಿ ಈ ಯೋಜನೆಯಡಿ ಆಯ್ಕೆಯಾದ ಗ್ರಾಮಗಳು ಹಾಗೂ ಕಾಮಗಾರಿಯ ಪ್ರಗತಿ ಕುರಿತು **ಅನುಬಂಧ-2** ಎಂದು ಗುರುತಿಸಿ ಲಗತ್ತಿಸಿದೆ |

ಸಂಖ್ಯೆ: ಗ್ರಾಅಪ 61(36) ಉಖಾಯೋ 2021

**(ಕೆ.ಎಸ್.ಈಶ್ವರಪ್ಪ)**

ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವರು

ಕೆ.ಎಸ್. ಈಶ್ವರಪ್ಪ
ಗ್ರಾಮೀಣಾಭಿವೃದ್ಧಿ ಮತ್ತು
ಪಂಚಾಯತ್ ರಾಜ್ ಸಚಿವರು

## ಅನುಬಂಧ-1

### ಹಂತ-4 (2019-20)

| ಕ್ರ. ಸಂ. | ಸಂಸದರ ಹೆಸರು | ಕ್ಷೇತ್ರ | ಜಿಲ್ಲೆ | ತಾಲ್ಲೂಕು | ಆಯ್ಕೆಯಾದ ಗ್ರಾಮ ಪಂಚಾಯತಿ |
|---|---|---|---|---|---|
| 1 | ಶ್ರೀ ಸುರೇಶ್ ಚನ್ನಬಸಪ್ಪ ಅಂಗಡಿ | ಬೆಳಗಾವಿ | ಬೆಳಗಾವಿ | ರಾಮದುರ್ಗ | ತೋರಣಗಟ್ಟಿ |
| 2 | ಶ್ರೀ ಗಂಗಸಂದ್ರ ಸಿದ್ದಪ್ಪ ಬಸವರಾಜ್ | ತುಮಕೂರು | ತುಮಕೂರು | ಕೊರಟಗೆರೆ | ಕುರಮಕೊಟ್ಟೆ |
| 3 | ಶ್ರೀ ವೈ ದೇವೇಂದ್ರಪ್ಪ | ಬಳ್ಳಾರಿ | ಬಳ್ಳಾರಿ | ಕುಡ್ಲಿಗಿ | ಉಜ್ಜಿನಿ |
| 4 | ಶ್ರೀ ಡಿ.ವಿ.ಸದಾನಂದಗೌಡ | ಬೆಂಗಳೂರು ಉತ್ತರ | ಬೆಂಗಳೂರು (ನಗರ) | ಬೆಂಗಳೂರು ದಕ್ಷಿಣ | ಚೆನ್ನೆನಹಳ್ಳಿ |
| 5 | ಡಾ॥ ಉಮೇಶ್ ಜಿ ಜಾದವ್ ಜಾದವ್ | ಕಲಬುರಗಿ | ಕಲಬುರಗಿ | ಚಿತ್ತಾಪುರ | ಮಲ್ಲಗತ್ತಿ |
| 6 | ಶ್ರೀ ಅಣ್ಣಾಸಹೇಬ ಶಂಕರ್ ಜೊಲ್ಲೆ | ಚಿಕ್ಕೋಡಿ | ಬೆಳಗಾವಿ | ಚಿಕ್ಕೋಡಿ | ಅಕ್ಕೋಲ |
| 7 | ಶ್ರೀ ಸಂಗಣ್ಣ ಅಮರಪ್ಪ ಕರಡಿ | ಕೊಪ್ಪಳ | ರಾಯಚೂರು | ಸಿಂಧನೂರು | ಗುಂಡ |
| 8 | ಶ್ರೀ ರಾಜಾ ಅಮರೇಶ್ವರ ನಾಯಕ್ | ರಾಯಚೂರು | ರಾಯಚೂರು | ಲಿಂಗಸೂಗುರು | ದೇವರಭೂಪುರ |
| 9 | ಶ್ರೀ ಗೌಡರ ಮಲ್ಲಿಕಾರ್ಜುನಪ್ಪ ಸಿದ್ದೇಶ್ವರ | ದಾವಣಗೆರೆ | ದಾವಣಗೆರೆ | ಹೊನ್ನಾಳಿ | ಸುರಟುರು |
| 10 | ಡಾ॥ ಪ್ರಭಾಕರ್ ಕೋರೆ | ರಾಜ್ಯ ಸಭೆ ಸದಸ್ಯರು | ಬೆಳಗಾವಿ | ಚಿಕ್ಕೋಡಿ | ಕಡಪುರ |
| 11 | ಶ್ರೀ ಜಿ ಸಿ ಚಂದ್ರಶೇಖರ್ | ರಾಜ್ಯ ಸಭೆ ಸದಸ್ಯರು | ಬೆಂಗಳೂರು ನಗರ | ಬೆಂಗಳೂರು ಉತ್ತರ | ಕೋಡಿಗೆಹಳ್ಳಿ |

## ಹಂತ-5 (2020-21)

| ಕ್ರ. ಸಂ. | ಸಂಸದರ ಹೆಸರು | ಕ್ಷೇತ್ರ | ಜಿಲ್ಲೆ | ತಾಲ್ಲೂಕು | ಆಯ್ಕೆಯಾದ ಗ್ರಾಮ ಪಂಚಾಯತಿ |
|---|---|---|---|---|---|
| 1 | ಶ್ರೀಮತಿ ಸುಮಲತಾ ಅಂಬರೀಶ್ | ಮಂಡ್ಯ | ಮಂಡ್ಯ | ಮದ್ದೂರು | ಬೆಸಗರಹಳ್ಳಿ |
| 2 | ಶ್ರೀ ಗಂಗಸಂದ್ರ ಸಿದ್ದಪ್ಪ ಬಸವರಾಜ್ | ತುಮಕೂರು | ತುಮಕೂರು | ಗುಬ್ಬಿ | ಮಾರಶೆಟ್ಟಿಹಳ್ಳಿ |
| 3 | ಶ್ರೀ ಪರ್ವತಗೌಡ ಚಂದನಗೌಡ ಗದ್ದಿನಗೌಡರ | ಬಾಗಲಕೋಟೆ | ಬಾಗಲಕೋಟೆ | ಬಾಗಲಕೋಟೆ | ಭಾಗವತಿ |
| 4 | ಶ್ರೀ ಬಿ ಎನ್ ಬಚ್ಚೇಗೌಡ | ಚಿಕ್ಕಬಳ್ಳಾಪುರ | ಬೆಂಗಳೂರು (ಗ್ರಾಮಾಂತರ) | ಹೊಸಕೋಟೆ | ನೆಲವಗಿಲು |
| 5 | ಶ್ರೀ ಎಸ್ ಮುನಿಸ್ವಾಮಿ | ಕೋಲಾರ | ಕೋಲಾರ | ಮಾಲೂರು | ಬನಹಳ್ಳಿ |
| 6 | ಶ್ರೀ ಎಸ್ ಮುನಿಸ್ವಾಮಿ | ಕೋಲಾರ | ಕೋಲಾರ | ಬಂಗಾರಪೇಟೆ | ಕ್ಯಾಸಂಬಳ್ಳಿ |
| 7 | ಶ್ರೀ ರಾಜಾ ಅಮರೇಶ್ವರ ನಾಯ್ಕ್ | ರಾಯಚೂರು | ಯಾದಗಿರಿ | ಶಾಹಪುರ | ಕೊಲ್ಲೂರು |
| 8 | ಶ್ರೀ ದೊಡ್ಡಲಹಳ್ಳಿ ಕೆಂಪೇಗೌಡ ಸುರೇಶ್ | ಬೆಂಗಳೂರು (ಗ್ರಾಮಾಂತರ) | ರಾಮನಗರ | ಚನ್ನಪಟ್ಟಣ | ಬನಗನಹಳ್ಳಿ |
| 9 | ಶ್ರೀ ಈರಣ್ಣ ಭೀಮಪ್ಪ ಕರಡಿ | ರಾಜ್ಯ ಸಭೆ ಸದಸ್ಯರು | ಬೆಳಗಾವಿ | ಪಾರಸಗಡ | ಇನಾಮಹೊಂಗಲ |

## ಹಂತ-6 (2021-22)

| ಕ್ರ. ಸಂ. | ಸಂಸದರ ಹೆಸರು | ಕ್ಷೇತ್ರ | ಜಿಲ್ಲೆ | ತಾಲ್ಲೂಕು | ಆಯ್ಕೆಯಾದ ಗ್ರಾಮ ಪಂಚಾಯತಿ |
|---|---|---|---|---|---|
| 1 | ಶ್ರೀಮತಿ ಸುಮಲತಾ ಅಂಬರೀಶ್ | ಮಂಡ್ಯ | ಮಂಡ್ಯ | ಮಂಡ್ಯ | ಬಸರಾಳು |
| 2 | ಶ್ರೀ ಪ್ರತಾಪ್ ಸಿಂಹ | ಮೈಸೂರು | ಕೊಡಗು | ಸೋಮಾರಪೇಟೆ | ಏಳನೇ ಹೊಸಕೋಟೆ |
| 3 | ಶ್ರೀ ಕರಡಿ ಸಂಗಣ್ಣ | ಕೊಪ್ಪಳ | ಕೊಪ್ಪಳ | ಕುಷ್ಟಗಿ | ಮಾಲಗಿತ್ತಿ |
| 4 | ಕೆ.ಎಮ್ ಶೋಭಾ ಕರಂದ್ಲಾಜೆ | ಉಡುಪಿ ಚಿಕ್ಕಮಗಳೂರು | ಚಿಕ್ಕಮಗಳೂರು | ತರೀಕೆರೆ | ಸುನಂದಾಹಳ್ಳಿ |

<u>ಅನುಬಂಧ–2</u>

| ಕ್ರ. ಸಂ. | ಹಂತ | ಜಿಲ್ಲೆ | ತಾಲ್ಲೂಕು | ಗ್ರಾಮ ಪಂಚಾಯತಿ | ಕಾಮಗಾರಿ ಪ್ರಗತಿ | ಒಟ್ಟು ಪೂರ್ಣಗೊಂಡ ಯೋಜನೆಗಳು |
|---|---|---|---|---|---|---|
| 1 | ಹಂತ–1 | ಮಂಡ್ಯ | ಪಾಂಡವಪುರ | ಟಿ.ಎಸ್.ಚತ್ರ | ಪೂರ್ಣಗೊಂಡಿದೆ | 244/253 |
| 2 | ಹಂತ–2 | ಮಂಡ್ಯ | ಮಂಡ್ಯ | ಮಾರಗೌಡನಹಳ್ಳಿ | ಪೂರ್ಣಗೊಂಡಿದೆ | 110/116 |
| 3 | ಹಂತ–2 | ಮಂಡ್ಯ | ಮದ್ದೂರು | ದೊಡ್ಡರಿಸಿನಕೆರೆ | ಪೂರ್ಣಗೊಂಡಿದೆ | 69/69 |
| 4 | ಹಂತ–5 | ಮಂಡ್ಯ | ಮದ್ದೂರು | ಬೆಸಗರಹಳ್ಳಿ | ಪ್ರಗತಿಯಲ್ಲಿದೆ. | 0/160 |
| 6 | ಹಂತ–6 | ಮಂಡ್ಯ | ಮಂಡ್ಯ | ಬಸರಾಳು | ಮೂಲ ಸಮೀಕ್ಷೆ ನಡೆಯುತ್ತಿದೆ. | |